

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1581
ಸದಸ್ಯರ ಹೆಸರು : ಶ್ರೀ ಆರ್.ಬಿ.ತಿಮ್ಮಾಪೂರ
ಉತ್ತರಿಸುವ ದಿನಾಂಕ : 24-09-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಈ ಹಿಂದೆ ಪರಿಶಿಷ್ಟ ಜಾತಿ/ ಪಂಗಡದವರಿಗಾಗಿ ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶನಾಲಯದಲ್ಲಿ ಇದ್ದ ಉದ್ಯೋಗ ವಿನಿಮಯ ಕೇಂದ್ರದಲ್ಲಿ ಹೆಸರು ನೊಂದಾಯಿಸಿದವರ ಸಂಖ್ಯೆ ಎಷ್ಟು; | ಸರ್ಕಾರದ ಆದೇಶ ಸಂಖ್ಯೆ : ಜಿಎಡಿ 129 ಎಸ್‌ಆರ್‌ಆರ್ 64 ದಿನಾಂಕ : 27.10.1964 ರಲ್ಲಿ ಸಮಾಜ ಕಲ್ಯಾಣ ಇಲಾಖೆಯಲ್ಲಿ ಉದ್ಯೋಗ ಕೋಶವನ್ನು ಸೃಜಿಸಲಾಗಿರುತ್ತದೆ. ಸದರಿ ಉದ್ಯೋಗ ಕೋಶದಲ್ಲಿ ವಿವಿಧ ಇಲಾಖೆಗಳಲ್ಲಿ ಮೀಸಲಾತಿಗೆ ಸಂಬಂಧಿಸಿದಂತೆ ಪರಿಶೀಲನೆ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಉದ್ಯೋಗ ದೊರಕಿಸಿಕೊಡಲು ನಿರ್ದೇಶಕರು, ರಾಷ್ಟ್ರೀಯ ಉದ್ಯೋಗ ಸೇವೆ ಹಾಗೂ ಉದ್ಯೋಗ ಕೇಂದ್ರಗಳೊಂದಿಗೆ ಸಮನ್ವಯ ಸಾಧಿಸುವ ಕರ್ತವ್ಯವನ್ನು ನಿಗದಿಪಡಿಸಲಾಗಿರುತ್ತದೆ. |
| (ಆ) | ಆ ಪೈಕಿ ಉದ್ಯೋಗ ದೊರೆತ ಅಭ್ಯರ್ಥಿಗಳ ವಿವರಗಳೇನು; | ಸಮಾಜ ಕಲ್ಯಾಣ ಇಲಾಖೆಯಲ್ಲಿದ್ದ ಉದ್ಯೋಗ ಕೋಶದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ಹೆಸರನ್ನು ನೊಂದಾಯಿಸಿಕೊಳ್ಳಲಾಗುತ್ತಿತ್ತು. ಸದರಿ ಉದ್ಯೋಗ ಕೋಶದಲ್ಲಿ ನೊಂದಾಯಿಸಲ್ಪಟ್ಟ ಅಭ್ಯರ್ಥಿಗಳ ಪಟ್ಟಿಯನ್ನು ವಿವಿಧ ನೇಮಕಾತಿ ಪ್ರಾಧಿಕಾರಿಗಳ ಬೇಡಿಕೆ ಮೇರೆಗೆ ನೇಮಕಾತಿಗಾಗಿ ಅಭ್ಯರ್ಥಿಗಳ ಹೆಸರನ್ನು ಕಳುಹಿಸಲಾಗುತ್ತಿತ್ತು. |
| (ಇ) | ಯಾವ ಕಾರಣಕ್ಕಾಗಿ ಈ ಕೋಶವನ್ನು ಮುಚ್ಚಲಾಯಿತು; ಈ ಉದ್ಯೋಗ ವಿನಿಮಯ ಕೇಂದ್ರವನ್ನು ಪುನಃ ಪ್ರಾರಂಭಿಸಿ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಅನುಕೂಲ ಕಲ್ಪಿಸಲು ಸರ್ಕಾರ ಮುಂದೆ ಬರುವುದೇ? | ಎಲ್ಲಾ ಇಲಾಖೆಗಳಲ್ಲಿ ನೇಮಕಾತಿಯನ್ನು ಕರ್ನಾಟಕ ಲೋಕಸೇವಾ ಆಯೋಗ, ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಹಾಗೂ ಇಲಾಖಾ ಹಂತಗಳಲ್ಲಿ ನೇಮಕಾತಿಗಾಗಿ ಪ್ರಕಟಣೆ ಹೊರಡಿಸಿ ವೆಬ್‌ಸೈಟ್‌ಗಳಲ್ಲಿ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸುವ ಪ್ರಕ್ರಿಯೆ ಪ್ರಾರಂಭವಾಯಿತು. ಮುಂದುವರೆದು, ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿನಿಯಮ ಕೇಂದ್ರದ ಮೂಲಕವೇ ಉದ್ಯೋಗ ಪಡೆಯಬೇಕೆಂಬುದು ಕಡ್ಡಾಯವಾಗಿರುವುದಿಲ್ಲ. ಈ ಕಾರಣದಿಂದ 2001 ರ ನಂತರ ನೊಂದಣಿ ಪ್ರಕ್ರಿಯೆಯನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿ ನಿಲ್ಲಿಸಲಾಗಿತ್ತು.<br><br>ತದನಂತರ, ಉದ್ಯೋಗ ಕೋಶ ಎಂಬ ಹೆಸರಿನ ಬದಲಾಗಿ ಮೀಸಲಾತಿ ಜಾರಿ ಕೋಶ ಎಂದು ಮರುನಾಮಕರಣ ಮಾಡಲಾಯಿತು. ಪ್ರಸ್ತುತ ವಿವಿಧ ಇಲಾಖೆಗಳಲ್ಲಿ ನೇರ ನೇಮಕಾತಿ ಮತ್ತು ಮುಂಬಡ್ತಿಯಲ್ಲಿ ಮೀಸಲಾತಿ ಜಾರಿಗೆ ಸಂಬಂಧಿಸಿದಂತೆ ಕ್ರಮವಹಿಸಲಾಗುತ್ತಿದೆ. |

| | | |
|---|---|---|
| | | ಪ್ರಸ್ತುತ ಎಲ್ಲಾ ಇಲಾಖೆಗಳ ನೇಮಕಾತಿಯನ್ನು ಕರ್ನಾಟಕ ಲೋಕಸೇವಾ ಆಯೋಗ, ಕರ್ನಾಟಕ ಪರೀಕ್ಷಾ ಪ್ರಾಧಿಕಾರ ಹಾಗೂ ಇಲಾಖಾ ಹಂತಗಳಲ್ಲಿ ನೇಮಕಾತಿಗಾಗಿ ಪ್ರಕಟಣೆ ಹೊರಡಿಸಿ ಆನ್‌ಲೈನ್ ಮುಖಾಂತರ ನೇಮಕಾತಿ ಪ್ರಕ್ರಿಯೆಯನ್ನು ಕೈಗೊಳ್ಳುತ್ತಿರುವುದರಿಂದ, ಸದರಿ ಪ್ರಕ್ರಿಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅವಕಾಶವಿರುವುದರಿಂದ ಸಮಾಜ ಕಲ್ಯಾಣ ಇಲಾಖೆಯಲ್ಲಿ ಉದ್ಯೋಗ ವಿನಿಯಮ ಕೇಂದ್ರವನ್ನು ಪುನಃ ಪ್ರಾರಂಭಿಸುವ ಅವಶ್ಯಕತೆ ಇರುವುದಿಲ್ಲ. |

ಸಕಇ 346 ಪಕವಿ 2021

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು.